ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತಮೂರನೆಯ ಅಧಿವೇಶನ

ಗುರುವಾರ, ದಿನಾಂಕ: 4ನೇ ಫೆಬ್ರುವರಿ, 2021

ಕಲ್ಯಾಣ ಕರ್ನಾಟಕ ಪ್ರದೇಶ ಅಭಿವೃದ್ಧಿ 371ಜೆ ಮೀಸಲಾತಿ ಕುರಿತು

ಶ್ರೀ ಅರವಿಂದ ಕುಮಾರ್ ಅರಳಿ (ವಿಧಾನಸಭೆಯಿಂದ ಚುನಾಯಿತರಾದವರು):-

328(389) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕಲ್ಯಾಣ ಕರ್ನಾಟಕದ 371ಜೆ ತಿದ್ದುಪಡಿಯಿಂದ ಕಲ್ಯಾಣ ಕರ್ನಾಟಕ ವಿಭಾಗದವರಿಗೆ ನೇಮಕಾತಿ ಹಾಗೂ ಬಡ್ತಿಯಲ್ಲಿ ಮೀಸಲಾತಿ ಒದಗಿಸಿದ್ದು, ಆ ಭಾಗದ ಜನರಿಗೆ ಹಾಗೂ ಸರ್ಕಾರಿ ನೌಕರರಿಗೆ ರಾಜ್ಯದ ಇತರೆ (ಬೆಳಗಾವಿ, ಮೈಸೂರು ಹಾಗೂ ಬೆಂಗಳೂರು) ವಿಭಾಗ ಹಾಗೂ ಜಿಲ್ಲಾ ಮಟ್ಟದಲ್ಲಿ ನೇಮಕಾತಿ ಹಾಗೂ ಪದೋನ್ನತಿಯಲ್ಲಿ ಮೀಸಲಿರಿಸಿದ ಹುದೆಗಳು ಎಷ್ಟು; (ಅಂಕಿ-ಅಂಶ ನೀಡುವುದು)

(ಆ) ಕಲ್ಯಾಣ ಕರ್ನಾಟಕ ಭಾಗದ ಪ್ರಾದೇಶಿಕ ಹಾಗೂ ಜಿಲ್ಲಾ ಮಟ್ಟದಲ್ಲಿ ಈ ಭಾಗದ ಸಾರ್ವಜನಿಕರಿಗೆ ಹಾಗೂ ಸರ್ಕಾರಿ ನೌಕರರಿಗೆ ನೇಮಕಾತಿಯಲ್ಲಿ ಹಾಗೂ ಬಡ್ತಿಯಲ್ಲಿ ಅನ್ಯಾಯವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರಿಪಡಿಸಲು ಸರ್ಕಾರ ಕ್ರಮ ವಹಿಸುವುದೇ;

(ಇ) ಕಲ್ಯಾಣ ಕರ್ನಾಟಕ ಪ್ರದೇಶದಲ್ಲಿ ಸರ್ಕಾರಿ ನೌಕರರ ಪದೋನ್ನತಿಯಲ್ಲಿ ಇತರೆ ವೃಂದದಲ್ಲಿ ಈಗಾಗಲೇ ಪದೋನ್ನತಿ ಪಡೆದ ನೌಕರರ ಸಂಖ್ಯೆ ಎಷ್ಟು; ಹಾಗೂ ಪದೋನ್ನತಿ ವಂಚಿತ ಹಿರಿಯ ನೌಕರರ ಸಂಖ್ಯೆ ಎಷ್ಟು; (ಅಂಕಿ-ಅಂಶ ನೀಡುವುದು)

(ಈ) ಕಲ್ಯಾಣ ಕರ್ನಾಟಕ ಭಾಗದಲ್ಲಿ ಕಾರ್ಯನಿರ್ವಹಿಸುತ್ತಿರುವ ಸರ್ಕಾರಿ ನೌಕರರಿಗೆ ಬಡ್ತಿ ನೀಡುವ ನಿಯಮಾವಳಿಯಲ್ಲಿ ಪ್ರತ್ಯೇಕ ಜೇಷ್ಠತಾ ಪಟ್ಟಿ ರಚಿಸಿ, ಈ ಭಾಗದ ಹಿರಿಯ ನೌಕರರನ್ನು ವಂಚಿಸಿ, ಇತರೆ ವೃಂದದ ಕಲ್ಯಾಣ ಕರ್ನಾಟಕ ಭಾಗದವರಲ್ಲದ ಕಿರಿಯ ವೃಂದದ ನೌಕರರಿಗೆ ಪದೋನ್ನತಿಗೆ ಪರಿಗಣಿಸುವ ನಿಯಮ ರೂಪಿಸಿರುವುದು ಯಾವ ಉದ್ದೇಶಕ್ಕೆ; (ಮಾಹಿತಿ ಒದಗಿಸುವುದು)

(ಉ) ಈ ನಿಯಮಕ್ಕೆ ತಿದ್ದುಪಡಿ ಮಾಡಿ ತಕ್ಷಣ ಈ ಭಾಗದ ಸಾರ್ವಜನಿಕರಿಗೆ ಹಾಗೂ ಸರ್ಕಾರಿ ನೌಕರರಿಗೆ ನ್ಯಾಯ ಒದಗಿಸಲಾಗುವುದೇ?